# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA-CHM. ಫೋನ್ : 114

8 ನೇ ವರ್ಷ 42ನೇ ಸಂಚಿಕೆ ಕೊಪ್ಪ 17-6-1990 ಭಾನುವಾರ ಬೆಲೆ 60 ಪೈಸೆ


## ಇಲ್ಲದ ಜಲ್ಲಿಗೆ

ಹರಿಹರಪುರ: ಇಲ್ಲಿಗೆ ಸಮೀಪದ ಮೇಲು ಬೆಳ್ರಿ ರಸ್ತೆಗೆ ಜಲ್ಲಿ ಸಂಗ್ರಹಣೆ ಮಾಡದೆ ಯೇ ಬಿಲ್ ಪಾವ್ತಿ ನಡೆದಿದೆಯೆಂಬ ಪ್ರಕ ರಣ ಸಾರ್ವಜನಿಕರಲ್ಲಿ ಕುತೂಹಲ ಮೂಡಿ ಸಿದೆ.

ಈ ಪ್ರಕರಣದ ಬಿಲ್ ಪಾವ್ತಿಯ ಸಂಪೂರ್ಣ ವಿವರಗಳೊಂದಿಗೆ ಯಾರೋ ನಾಗರಿಕರು ರಾಜ್ಯದ ವಿಜಿಲೆನ್ಸ್‌ನವರಿಗೆ ಬೇನಾಮಿ ದೂರು ನೀಡಿದ ಹಿನ್ನೆಲೆಯಲ್ಲಿ

ಬೆಂ..

ತಂಡದವ..

ವಲ ಒಂದೆರಡು..

ತುರಿಯಲ್ಲಿ ಜಲ್ಲಿ ಸಾ..

ತೆನ್ನಲಾಗಿದೆ.

ಆದರೆ, ಈ ಪ್ರಕರಣದಲ್ಲಿ ..

ಲಾದ ಜಿಲ್ಲಾಪರಿಷತ್ತಿನ ಕೊಪ್ಪದ ಸ.. ಇಂಜಿನಿಯರ್ ಗೋಪಾಲಯ್ಯ, ಸಹಾಯಕ ಇಂಜಿನಿಯರ್ ಪರಮೇಶ್ವರಪ್ಪ ಮತ್ತು ಸಂಬಂಧಪಟ್ಟ ಗುತ್ತಿಗೆದಾರ ಮೊೖದಿನಬ್ಬ ಇವರನ್ನು ಬಚಾವ್ ಮಾಡಲು ಜಿ..ಪ. ಎಕ್ಸಿಕ್ಯುಟಿವ್ ಇಂಜಿನಿಯರ್ ಅವರು ಶಕ್ತಿ ಮೀರಿ ಶ್ರಮಿಸಿದ್ದು, ತನಿಖಾ ತಂಡ ದವರನ್ನು ಶೃಂಗೇರಿಯಲ್ಲೇ ಒಂದೂವರೆ ದಿನ 'ಕ್ಷೇತ್ರ ದರ್ಶನ'ದ ನೆಪದಲ್ಲಿ ತಡೆದ. ನಿಲ್ಲಿಸಿ ಕೊಂಡರೆಂದು ತಿಳಿದು ಬಂದಿದೆ

## ಅನಿರೀಕ್ಷಿತ, "ಅಕಸ್ಮಾತ್" ಬೆಳವಣಿಗೆ: ನ. ರಾ. ಪುರ ಪ್ರಧಾನರಾಗಿ

# ಜನತಾ ದಳದ ಲಕ್ಷ್ಮಣ ಶೆಟ್ಟಿ ಆಯ್ಕೆ

**ನ.ರಾ. ಪುರ: ನಮ್ಮ 6-5-90ರ ಸಂಚಿಕೆಯಲ್ಲಿ ಪ್ರಕಟಿಸಿದ್ದಂತೆ—ಯಾರೂ ನಿರೀಕ್ಷಿಸಿರದಿದ್ದಂತಹ—"ಅಕಸ್ಮಾತ್" ಒಂದು ನಡೆದು ಹೋಗಿದೆ. ಜನತಾ ದಳದ ಲಕ್ಷ್ಮಣ ಶೆಟ್ಟಿ ನ ರಾ.ಪುರ ಪರಿವರ್ತಿತ ಮಂಡಲದ ಪ್ರಧಾನರಾಗಿ ಆಯ್ಕೆಯಾಗಿದ್ದಾರೆ**

ಪ್ರಧಾನ ಪಟ್ಟಕ್ಕಾಗಿ ಕಾಂಗ್ರೆಸ್ ಮುಖ ಕಿನ ಗುದ್ದಾಟ ಬಗೆಹರಿಯದೆ, ಎಚ್. ಬಿ. ರಘುವೀರ್ ಮತ್ತು ಎಚ್.ಜಿ. ಭಾಸ್ಕರ್ ಇಬ್ಬರೂ ನಾಮಪತ್ರ ಸಲ್ಲಿಸಿದ್ದರು. ಜೂನ್ 16ರಂದು ಬೆಳಿಗ್ಗೆ 11 ಗಂಟೆಗೆ ಚುನಾವಣೆ ವೇಳಾಪಟ್ಟಿ ಘೋಷಣೆಯಾಗಿತ್ತು. ಆದರೆ ಈ ಗುಂಪುಗಳು 'ರಾಜಿ'ಯಾಗುವ ಯತ್ನದಲ್ಲಿ ಹನ್ನೊಂದೂವರೆ ಗಂಟೆಗೆ ಚುನಾವಣಾ ಕಾರ್ಯಾಲಯಕ್ಕೆ ಬಂದಾಗ, ಲಕ್ಷ್ಮಣ ಶೆಟ್ಟಿ ಪ್ರಧಾನರಾಗಿ ಆಯ್ಕೆಯಾಗಿರುವು ದನ್ನು ಚುನಾವಣಾಧಿಕಾರಿ ಚಿದಾನಂದ್ ಹೆಗ್ಗಾರ್ ಘೋಷಿಸಿಯಾಗಿತ್ತು.

ಪಕ್ಷೇತರರಾಗಿ ಗೆದ್ದು. ಕೊನೇ ಹಂತ ದಲ್ಲಿ ಕಾಂಗ್ರೆಸ್‌ಗೆ ಬೆಂಬಲಘೋಷಿಸಿಕೊಂಡಿದ್ದ ಮೋಣು ಕಾಕಾ ಉಪ ಪ್ರಧಾನರಾಗಿ 'ಆಯ್ಕೆ'ಯಾದರು.

ಕುಪಿತ ಕಾಂಗ್ರೆಸ್ ಸದಸ್ಯರು ಮತ್ತು ಅವ ರ ಬೆಂಬಲಿಗರು ಚುನಾವಣಾಧಿಕಾರಿಗಳಿಗೆ ಧಿಕ್ಕಾರ ಕೂಗಿದರಲ್ಲದೆ, ಈ ಆಯ್ಕೆಯ ವಿರುದ್ಧ ನ್ಯಾಯಾಲಯಕ್ಕೆ ಹೋಗುವು ದಾಗಿ ಮಾತಾಡಿಕೊಳ್ಳುತ್ತಿದ್ದುದು ಕಂಡು ಬಂತು.

### ಶೃಂಗೇರಿ, ಕೊಪ್ಪ ಪ್ರಧಾನರ ಚುನಾವಣೆ 18 ಮತ್ತು 19 ರಂದು

ಶೃಂಗೇರಿ ಪರಿವರ್ತಿತ ಮಂಡಲದ ಪ್ರಧಾ ನರ ಚುನಾವಣೆ ಜೂನ್ 18 ರಂದು ನಡೆಯ ಲಿದ್ದು, ಕಾಂಗ್ರೆಸ್‌ನ ಎಚ್. ಆರ್. ಕೃಷ್ಣ ಮೂರ್ತಿಯ ಆಯ್ಕೆ ಖಚಿತವೆನ್ನಿಸಿದೆ.

ಕೊಪ್ಪದಲ್ಲಿ ಚುನಾವಣೆ ಜೂನ್ 19ರ ಬೆಳಿಗ್ಗೆ 11 ಗಂಟೆಗೆ ನಿಗದಿಯಾಗಿದೆ ಪ್ರಧಾ ನ ಪಟ್ಟಕ್ಕೆ ಕಾಂಗ್ರೆಸ್ಸಿನೊಳಗೇ ಪ್ರತಿ ಸ್ಪರ್ಧಿ ಗಳಾಗಿದ್ದ ವಿವೇಕ್ ಮತ್ತು ಸಾದಿಕ್ ಮಧ್ಯೆ ಒಪ್ಪಂದವೋ ಹೊಂದಾಣಿಕೆಯೋ ಏನೋ ಒಂದು ಆಗಿದ್ದು, ವಿವೇಕ್ ಆಯ್ಕೆ ಖಚಿತ ಎನ್ನಲಾಗುತ್ತಿದೆ.

## ಜೂನ್ 19ರಂದು ಕೊಪ್ಪಕ್ಕೆ ಜಿಲ್ಲಾ ಮತ್ತು ಸೆಶನ್ಸ್ ನ್ಯಾಯಾಧೀಶರ ಭೇಟಿ

ಕೊಪ್ಪ : ಇಲ್ಲಿ ನ್ಯಾಯಾಲಯ ಸ್ಥಾಪ ನೆಯ ಬಗ್ಗೆ ಕಟ್ಟಡಗಳ ಪರಿಶೀಲನೆಗಾಗಿ ಜಿಲ್ಲಾ ಮತ್ತು ಸೆಶನ್ಸ್ ನ್ಯಾಯಾಧೀಶ ರಾದ ಶ್ರೀ ಬಿ. ಕೆ. ಸಂಗಳದ್‌ರವರು ಜೂನ್ 19 ರಂದು ಮಂಗಳವಾರ ಮಧ್ಯಾಹ್ನ 2 ಗಂಟೆಗೆ ಭೇಟಿ ನೀಡಲಿದ್ದಾರೆ.

ಈಗಾಗಲೇ ಜಿಲ್ಲಾ ಪರಿಷತ್ತು ಶಿಫಾರ್ಸು ಮಾಡಿರುವ ಹಳೇ ಸರ್ಕಾರಿ ಆಸ್ಪತ್ರೆ ಕಟ್ಟಡ ವಲ್ಲದೆ ಇನ್ನೂ ಒಂದೆರಡು ಕಟ್ಟಡಗಳನ್ನು ಅವರು ಪರಿಶೀಲಿಸುವ ಸಂಭವವಿದೆ.

ಅವರ ಗೌರವಾರ್ಥ ನಾಗರಿಕರಿಂದ ಚಹಾ ಕೂಟವೊಂದನ್ನು ಅಪರಾಹ್ನ 4 ಗಂಟೆಗೆ ತಹಸೀಲ್ದಾರ್ ಸಭಾಂಗಣದಲ್ಲಿ ತಾ||ಬಾರ್ ಕೌನ್ಸಿಲ್ ನೇತೃತ್ವದಲ್ಲಿ ಏರ್ಪಡಿಸಲಾಗಿದೆ.

## ಚಿಕ್ಕೇಗೌಡ, ಸಂಜೀವನ ಮೇಲೆ 'ರೌಡಿ' ಶೀಟ್ !

ಕೊಪ್ಪ : ನೂತನ ಎಸ್ಪಿಯವರ ಆದೇಶ ದಂತೆ ಇಲ್ಲಿನ ಸಬ್ ಇನ್‌ಸ್ಪೆಕ್ಟರು ಶಂಕರ್ ಕಂಪೆನಿ ಕಾರ್ಮಿಕ ಸಂಘದ ಮುಂದಾಳು ಗಳಾದ ಚಿಕ್ಕೇಗೌಡ ಮತ್ತು ಸಂಜೀವ ಅವರ ಮೇಲೆ 'ರೌಡಿ ಶೀಟ್' ತೆಗೆದು, ಅವ ರನ್ನು ಶನಿವಾರ ಸಂಜೆ ತಹಸೀಲ್ದಾರರೆದುರು ಹಾಜರುಪಡಿಸಿ, ಶಿವಮೊಗ್ಗ ಜೈಲಿಗೆ ಕಳಿಸಿ ದ್ದಾರೆ. (ವಿವರ : ಮುಂದಿನ ಸಂಚಿಕೆಯಲ್ಲಿ)

## ಬೇಗಾರು ಪ್ರೌಢಶಾಲೆಗೆ ಉತ್ತಮ ಫಲಿತಾಂಶ : ಪ್ರಧಾನರ ಮೆಚ್ಚುಗೆ

ಬೇಗಾರು : ಇಲ್ಲಿನ ಸರ್ಕಾರಿ ಪ್ರೌಢ ಶಾಲೆ ಈ ವರ್ಷದ ಎಸ್ಸೆಸ್ಸೆಲ್ಸಿ ಪರೀಕ್ಷೆಯಲ್ಲಿ ಶೇ. 63 ಫಲಿತಾಂಶ ಗಳಿಸಿ ಹೆಮ್ಮೆಯಿಂದ ಬೀಗುತ್ತಿದೆ.

ಅತ್ಯಂತ ಹಿಂದುಳಿದ ಪ್ರದೇಶಗಳ ಮಕ್ಕ ಳು–ಅದರಲ್ಲೂ ಅನುಕೂಲಸ್ಥರಲ್ಲದ ಬಡ ವರ ಮಕ್ಕಳೇ–ಇರುವ ಈ ಶಾಲೆ 1987–88ರಲ್ಲಿ ಕೇವಲ ಶೇ. 28ರ ಫಲಿತಾಂಶ ಪಡೆದಿತ್ತು; 88–89ರಲ್ಲಿ ಅದು 46ಕ್ಕೇರಿ ತು. ಈ ಸಲದ ಫಲಿತಾಂಶ ತಮಗೆಲ್ಲ ತೃಪ್ತಿ ತಂದಿದೆ ಎನ್ನುತ್ತಾರೆ. ಇದೇ ಗ್ರಾಮದವ ರಾದ ಮಂಡಲ ಪ್ರಧಾನ ಕೆ. ಟಿ ಚಂದ್ರ ಹಾಸ ಅವರು.

ಈ ಪ್ರಗತಿಗೆ ಮುಖ್ಯ ಕಾರಣರಾದ ಅ ಧ್ಯಾಪಕ ವೃಂದಕ್ಕೆ ಅವರು ಪೋಷಕ ವೃಂದ ದವರ ಪರವಾಗಿ ಅಭಿನಂದನೆ ಸಲ್ಲಿಸಿದ್ದಾರೆ.

## ನೆಮ್ಮಾರು ಆಸ್ಪತ್ರೆ ಉದ್ಘಾಟನಾ ಫಲಕ ಭಗ್ನ; ಪ್ರಕರಣ ದಾಖಲು

(ವರದಿ : ಕಲ್ಕುಳಿ ವಿಠಲ ಹೆಗ್ಡೆ)

ಶೃಂಗೇರಿ : ಇಲ್ಲಿಗೆ ಸಮೀಪದ ನೆಮ್ಮಾರಿ ನಲ್ಲಿ ಎರಡು ವಾರದ ಹಿಂದೆ ಆರೋಗ್ಯ ಸಚಿವೆ ಮನೋರಮಾ ಮಧ್ವರಾಜ್ ಉದ್ಘಾ ಟಿಸಿದ ಪ್ರಾ|ಆರೋಗ್ಯ ಘಟಕದ ಕಟ್ಟಡದ ಉದ್ಘಾಟನಾ ಫಲಕವನ್ನು ಮರುದಿನವೇ ಯಾರೋ ಒಡೆದು ಹಾಕಿದ್ದು, ಪೋಲೀಸರು ಪ್ರಕರಣ ದಾಖಲಿಸಿಕೊಂಡಿದ್ದಾರೆ.

ಈ ಹಿನ್ನೆಲೆಯಲ್ಲಿ ಸ್ಥಳೀಯ ಮುಖಂಡ ರುಗಳಾದ ಕಚ್ಚೋಡಿ ಶ್ರೀನಿವಾಸ್, ಉಪ ಪ್ರಧಾನ ಕಾಳಯ್ಯ, ಶ್ರೀನಿವಾಸ ಹೆಗ್ಡೆ, ಎಸ್. ಜಿ. ನಾಗೇಶ್, ಶಿಂಗಪ್ಪ ಗೌಡ ಇವರುಗಳನ್ನು ಬಂಧಿಸಲಿದ್ದಾರೆಂಬ ಗುಲ್ಲು ಹರಡಿದೆ ಆದರೆ, "ವೈಯಕ್ತಿಕವಾಗಿ ಯಾರ ಮೇಲೂ ದೂರು ದಾಖಲಿಸಿಲ್ಲ. 'ಗುಮಾನಿ ಇರುವವರ ಮೇಲೆ ಕೂಡ ಯಾರೂ ದೂರು ನೀಡುತ್ತಿಲ್ಲ. ಆದ್ದರಿಂದ ಯಾರನ್ನೂ ಬಂಧಿ ಸುವ ತಯಾರಿ ನಡೆದಿಲ್ಲ" ಎಂದು ಹೊಸ ಸಬ್ ಇನ್‌ಸ್ಪೆಕ್ಟರ್' ಮರಿ ಗೌಡ ಹೇಳು ತ್ತಾರೆ.

ಬಂಧನಕ್ಕೆ ಒತ್ತಡ?

ಕಿಲ್ಪತ್ತಿ ಮಠ... ಪ್ರಧಾನ, ಕಾಂಗ್ರೆಸ್ ಮುಖಂಡರುಗಳು ಮೇಲ್ಕಂಡ ಜನತಾ ದಳದ ಕಾರ್ಯಕರ್ತರನ್ನು ಬಂಧಿಸುವಂತೆ ಸ ಇ. ಮೇಲೆ ಒತ್ತಡ ತರುತ್ತಿದ್ದಾರೆಂದೂ, ಇವರುಗಳ ಮೇಲೆ ಗುಮಾನಿ ವ್ಯಕ್ತಪಡಿಸಿ ದೂರು ನೀಡುವಂತೆ. ಮಂಡಲ ಪ್ರಧಾನ ಎಂ. ಜಿ. ಸುಧಾಕರ ಹೆಗ್ಡೆಯವರನ್ನು ಸಬ್ ಇನ್‌ಸ್ಪೆಕ್ಟರ್ ಕೇಳಿದಾಗ ಅವರು ನಿರಾಕರಿ ಸಿದರೆಂದೂ ತಿಳಿದು ಬರುತ್ತದೆ.

### ಹಗರಣ

ಈ ಉದ್ಘಾಟನಾ ಕಾರ್ಯಕ್ರಮ ಆರಂಭ ದಿಂದಲೂ ಹಗರಣಕ್ಕೆ ಒಳಗಾಗಿದೆ. ಗೋವಿಂದ ಗೌಡರ ಕಾಲದಲ್ಲೇ ಮಂಜೂ ರಾದ ಈ ಆಸ್ಪತ್ರೆಗಾಗಿ 25 ಸಾವಿರ ರೂ. ಸಾರ್ವಜನಿಕ ವಂತಿಗೆ ಕೂಡಿಸಲು ಕಚ್ಚೋಡಿ ಶ್ರೀನಿವಾಸ್ ಅಧ್ಯಕ್ಷತೆಯಲ್ಲಿ ರವೀಂದ್ರನಾಥ್ ಕಾರ್ಯದರ್ಶಿ ಮತ್ತು ಶಿವಶಂಕರರಾವ್ ಖಜಾಂಚಿಯಾಗಿ ರಚಿಸ ಲ್ಪಟ್ಟಿದ್ದ ಸಮಿತಿ 30 ಸಾವಿರ ರೂ. ಸಂಗ್ರ ಹಿಸಿತ್ತು. ಆಗ 1 ಸಾವಿರ ರೂ. ದೇಣಿಗೆ ನೀಡಿದವರ ಫೋಟೋಗಳನ್ನು ಆಸ್ಪತ್ರೆ ಯಲ್ಲಿ ತೂಗು ಹಾಕುವುದು ಮತ್ತು ಅವರು ಗಳನ್ನು ಉದ್ಘಾಟನಾ ಸಮಾರಂಭದಲ್ಲಿ ಸನ್ಮಾನಿಸುವುದು ಎಂದು ತೀರ್ಮಾನಿಸ ಲಾಗಿತ್ತು.

ಆದರೆ ಬದಲಾದ ರಾಜಕೀಯ ಪರಿಸ್ಥಿತಿ ಯಲ್ಲಿ ಇದಾವುದೂ ನಡೆಯದೆ, ದಾನಿಗಳಿ ಗೆಲ್ಲ ಸರಿಯಾಗಿ ಆಹ್ವಾನವನ್ನೂ ನೀಡದೆ ಆಸ್ಪತ್ರೆ ಕಟ್ಟಡಕ್ಕಾಗಿ ಯಾವ ಸೇವೆ– ತ್ಯಾಗಗಳನ್ನೂ ಮಾಡದ ರಾಜಕೀಯ ವ್ಯಕ್ತಿಯೊಬ್ಬರನ್ನು ಸನ್ಮಾನಿಸುವುದು ತಿಳಿ ದಾಗ ಅಸಮಾಧಾನ ಭುಗಿಲೆದ್ದಿತ್ತು. ಉದ್ಘಾಟನೆಗೆ ಬಂದ ಸಚಿವೆ ಮನೋರಮಾ ಗೆ ಕಪ್ಪು ಬಾವುಟ ಪ್ರದರ್ಶಿಸಬೇಕೆಂಬ ವರೆಗೂ ಚರ್ಚೆಯಾಗಿ, ಕಚ್ಚೋಡಿ ಶ್ರೀನಿ ವಾಸ್ ಮಧ್ಯ ಪ್ರವೇಶದಿಂದ ಅದು ನಡೆ ಯಲಿಲ್ಲ. ಅಸಮಾಧಾನಗೊಂಡ ಬಹು ತೇಕ ಗ್ರಾಮಸ್ಥರು ಕಾರ್ಯಕ್ರಮಕ್ಕೆ ಹೋಗದೆ, ಪುಡಾರಿಗಳನ್ನೇ ಮೆರೆಯಲು ಬಿಟ್ಟರು.

ಆದರೂ ಬಲ್ಲವರ್‍ಯಾರೂ ಶಿಲಾಫಲಕ ಒಡೆದಿರಲಾರರು; ಅದು ಯಾರೋ ಹುಡು ಗರ ಪುಂಡುತನವಿರಬಹುದು ಎಂಬುದು ಗ್ರಾಮಸ್ಥರ ಅಭಿಪ್ರಾಯ. ಅಂತೂ ಪ್ರಕ ರಣ ಕುತೂಹಲದ ತಿರುವುಗಳನ್ನು ಪಡೆ ಯುತ್ತಿದೆ.

## ಬಸ್ ಅಪಘಾತ : ಕಂಡಕ್ಟರ್‌ಗೆ ತೀವ್ರ ಪೆಟ್ಟು

ಕೊಪ್ಪ : 'ತಿಪ್ಪೇಸ್ವಾಮಿ ಗಾಡಿ' ಎಂದೇ ಪ್ರಸಿದ್ಧಿಯಾಗಿರುವ ಶೃಂಗೇರಿ–ಶಿವಮೊಗ್ಗ ಶಂಕರ್ ಬಸ್ಸನ್ನು ಜೂನ್ 13 ರಂದು ..ದುರಿಗುಂಡಿಯಿಂದ ಮುಂದಕ್ಕೆ ಡ್ರೈವರ್ ..ದಲು ಮೆಕ್ಯಾನಿಕ್ ನರಹರಿ ಓಡಿಸಿ, ಅಲ್ಲೇ ..ಡ್ಡೆಗೆ ಬೀಳಿಸಿ ಅಪಘಾತವುಂಟು ಮಾಡಿ ..ರು.

ಕಂಡಕ್ಟರ್ ತಿಪ್ಪೇಸ್ವಾಮಿ ಕೆಸರಿನಲ್ಲಿ ..ಸ್ಸಿನ ಅಡಿಗೆ ಸಿಕ್ಕಿಕೊಂಡರೂ, ಸಕಾಲ ..ಲ್ಲಿ ಗ್ರಾಮಸ್ಥರು ಸೇರಿ ಬಸ್ಸನ್ನೆತ್ತಿ ಅವ ..ನ್ನು ಪಾರು ಮಾಡಿದರು. ಆದರೆ ಅವರ ..ಳೆ ಮುರಿದಿದ್ದು, ಮಣಿಪಾಲಕ್ಕೆ ದಾಖ ..ಲಾಗಿದೆ. ಇನ್ನೂ 15-20 ಮಂದಿಗೆ ..ಯಗಳಾಗಿವೆ.

# ಮೇನಕಾ ಗಾಂಧಿ : ಪರಿಸರ ಇಲಾಖೆಗೊಬ್ಬರು ಪ್ರಾಮಾಣಿಕ ಕಾಳಜಿಯುಳ್ಳ ಮಂತ್ರಿ

## —ಆದರೆ ಈಗ ಅವರ ಕೈಗಳನ್ನು ಕಟ್ಟಿಹಾಕಲಾಗುತ್ತಿದೆಯೆ ?

ಪರಿಸರ ಅಥವಾ ಪ್ರಕೃತಿ ಎಂಬುದೊಂದು ನಮ್ಮನ್ನು ಆವರಿಸಿದೆ (ಅಥವಾ ಅದರಲ್ಲಿ ನಾವು ಜೀವಿಸುತ್ತಿದ್ದೇವೆ); ಅದನ್ನು ಸಂರಕ್ಷಿಸಿಕೊಳ್ಳಬೇಕು ವಿನಃ ನಾಶ ಅಥವಾ ಮಲಿನಗೊಳಿಸಬಾರದು — ಎಂಬಂಥ ಪರಿಸರ ಪ್ರಜ್ಞೆ ಈಚಿನ ವರ್ಷಗಳಲ್ಲಿ ಜನತೆಯಲ್ಲಿ ನಿಧಾನವಾಗಿ ಬೆಳೆಯುತ್ತಿದೆಯಷ್ಟೆ. ಈ ಪರಿಸರ ಸಂರಕ್ಷಣೆಯ ಹೊಣೆ ನಿರ್ವಹಿಸುವುದಕ್ಕಾಗಿ ಕೇಂದ್ರ ಸರ್ಕಾರದಲ್ಲಿ ಒಂದು ಸಚಿವಖಾತೆಯೇ ಇದೆ ಎಂಬುದನ್ನು ದೇಶದ ಜನರ ಗಮನಕ್ಕೆ ಬರುವಂತೆ ಮಾಡಿದವರು ಆ ಖಾತೆಯ ಮಂತ್ರಿ ಮೇನಕಾ ಗಾಂಧಿ.

ಪರಿಸರ ಮತ್ತು ಪಶು-ಪಕ್ಷಿ ಸಂಕುಲಗಳ ಬಗ್ಗೆ ಆಳವಾದ ಅಧ್ಯಯನ ನಡೆಸಿರುವ ಮೇನಕಾ ಈ ವಿಷಯದಲ್ಲಿ ಹೆಸರುಗಳ ಮಹಾಗ್ರಂಥ (ಎನ್‌ಸೈಕ್ಲೋಪೀಡಿಯ), ಕಾದಂಬರಿ ಹಾಗೂ ಮಕ್ಕಳಿಗಾಗಿ ಕತೆ, ಪದಬಂಧ ಮುಂತಾದುವುಗಳನ್ನು ರಚಿಸಿದ್ದಾರೆ. "ಪರಿಸರ ರಕ್ಷಣೆ ನನಗೆ ಕೇವಲ ಒಂದು ಹವ್ಯಾಸವಲ್ಲ; ಅದು ನನ್ನ ಧ್ಯೇಯ. ಅದರಲ್ಲಿ ನನಗೆ ಅವಸರವಿಲ್ಲ. ಪರಿಸರ ನಾಶಕ್ಕೆ ಕಾರಣವಾಗುವ ಎಲ್ಲಾ ಯೋಜನೆಗಳೂ ಈ ಕೂಡಲೇ ನಿಂತು ಬಿಡಬೇಕೆಂದೂ ನಾನು ಹಟ ಹಿಡಿಯುವುದಿಲ್ಲ. ಜಾರಿಗೊಂಡಿರುವ ಯೋಜನೆಗಳ ಸಾಧಕ-ಬಾಧಕಗಳನ್ನು ಬಹು ಜನರಿಗೆ ಮನಗಾಣಿಸಿಕೊಟ್ಟು ತೀರ್ಮಾನಕ್ಕೆ ಬರುವುದು ನನ್ನ ಕ್ರಮ" ಎನ್ನುವ ಅವರು, 'ತೀರಾ ಆದರ್ಶವಾದಿ, ವ್ಯವಹಾರ ಜ್ಞಾನವಿಲ್ಲದವಳು' ಮುಂತಾದ ಟೀಕೆಗಳಿಗೆ, "ನೀತಿ-ನಿಯಮಗಳನ್ನು ಗಾಳಿಗೆ ತೂರಿ, ಅಧಿಕಾರವುಳಿಸಿಕೊಳ್ಳಲು ಪರಿಸರ ನಾಶಕ್ಕೆ ಸಮ್ಮತಿಸುವುದೇ ವ್ಯವಹಾರ ಜ್ಞಾನ ಎಂದಾದರೆ, ಅದು ನನಗೆ ಬೇಕಿಲ್ಲ. ಮುಂದಿನ ಚುನಾವಣೆಗಳಲ್ಲಿ ನನಗೆ ಟಿಕೆಟ್ ಸಿಗದಿದ್ದರೂ ಚಿಂತೆಯಿಲ್ಲ. ಅಧಿಕಾರದಲ್ಲುಳಿಯಲು ರಾಜಕೀಯ ಮಾಡುವುದು ನನಗೆ ಬೇಕಿಲ್ಲ. ಪರಿಸರ ರಕ್ಷಣೆಯ ನನ್ನ ಗುರಿ ಸಾಧನೆಗೆ ರಾಜಕೀಯ ಅಧಿಕಾರ ಬಳಸಿಕೊಳ್ಳುವ ಹಂಬಲ ಮಾತ್ರ ನನ್ನದು" ಎನ್ನುತ್ತಾರೆ.

ಪರಿಸರ ಖಾತೆಯ ರಾಜ್ಯ ಸಚಿವೆಯಾಗಿ ನೇಮಕಗೊಂಡ ಕೇವಲ ಆರು ತಿಂಗಳೊಳಗೆ ಮೇನಕಾ ರೂಪಿಸಿದ ಯೋಜನೆಗಳು, ಜಾರಿಗೆ ತಂದ ಹಳೆಯ ಕಾಯ್ದೆ-ನಿಯಮಗಳು ಹಾಗೂ ತೋರಿಸಿದ ದಿಟ್ಟತನ, ಕಾಳಜಿ, ಪ್ರಾಮಾಣಿಕತೆಗಳು ಇತರ ಭ್ರಷ್ಟ ಮಂತ್ರಿಗಳಿಗೆ, ದೇಶ ನುಂಗುವ ರಕ್ಕಸ ಕೈಗಾರಿಕೋದ್ಯಮಿಗಳಿಗೆ ಹಾಗೂ ಎಂಜಲ ಅಧಿಕಾರಶಾಹಿಗೆ ತೀವ್ರ 'ಶಾಕ್' ನೀಡಿ ಅವರ ಅನೈತಿಕ 'ಗುಳುಂ' ಗಳಿಗೆ ಕಡಿವಾಣ ಹಾಕಿದ್ದು ಅವರಿಗೆ ನುಂಗಲಾರದ ತುತ್ತಾಗಿತ್ತು.

ಹೊಸದಾಗಿ ರೂಪಿತವಾಗಿರುವ ವಾಹನಗಳ ಕಾಯ್ದೆಯನ್ನು ಕೂಡಲೇ ಜಾರಿಗೊಳಿಸಬೇಕು; ತಂಪು ಪಾನೀಯಗಳಲ್ಲಿ ಬ್ರಾಮಿನೇಟೆಡ್ ವೆಜಿಟಬಲ್ ಆಯಿಲ್ (ಬಿ. ವಿ. ಓ ) ಗಳನ್ನು ಬಳಸಕೂಡದು ; ಕನಿಷ್ಠ ಸಾರ್ವಜನಿಕ ಸ್ಥಳಗಳಲ್ಲಾದರೂ ಧೂಮಪಾನ ನಿಷೇಧಿಸಬೇಕು —ಎಂಬಂಥ ವಿಷಯಗಳ ಬಗ್ಗೆ ಕೇಂದ್ರ ಸರ್ಕಾರದಲ್ಲಿ ಒತ್ತಾಯ ತಂದಿದ್ದ ಮೇನಕಾ, ಪರಿಸರ ಮಾಲಿನ್ಯ ಉಂಟು ಮಾಡುವ ಅಥವಾ ಅರಣ್ಯ ನಾಶ ಮಾಡುವ ಹಲವಾರು ಯೋಜನೆ, ಉದ್ಯಮ, ಕೈಗಾರಿಕೆ ಮುಂತಾದವುಗಳ ಪರವಾನಗಿಯನ್ನು ತಡೆಹಿಡಿದಿದ್ದರು. ತೆಹರಿ, ನರ್ಮದಾ ಮತ್ತು ಸರ್ದಾರ್ ಸರೋವರಗಳ ಬೃಹತ್ ನೀರಾವರಿ ಮತ್ತು ಜಲ ವಿದ್ಯುತ್ ಯೋಜನೆಗಳ ಕೆಲಸಗಳನ್ನು ತಡೆಹಿಡಿದು, ನಿರಾಶ್ರಿತರ ಪುನರ್ವಸತಿ, ಜಲಾನಯನ ಪ್ರದೇಶಗಳ ಅಭಿವೃದ್ಧಿ ಮತ್ತು ಅರಣ್ಯೀಕರಣಗಳಿಗೆ ಸಮರ್ಪಕ ಕಾರ್ಯಕ್ರಮ ರೂಪಿಸಬೇಕೆಂದೂ ಈ ಯೋಜನೆಗಳ ಯುಕ್ತಾಯುಕ್ತತೆಯ ಬಗ್ಗೆಯೇ ಮೂಲಭೂತ ಚರ್ಚೆ ನಡೆಯಬೇಕೆಂದೂ ಅವರು ಒತ್ತಾಯಿಸಿದ್ದರು.

ಒರಿಸ್ಸಾದ ಹಿಂದಿನ ಮುಖ್ಯ ಮಂತ್ರಿ ಜೆ. ಬಿ. ಪಟ್ನಾಯಕ್ ಒಬೇರಾಯ್ ಗುಂಪಿಗೆ ಹೋಟೆಲ್ ನಿರ್ಮಿಸಲು ಕೋನಾರ್ಕದ ಸಮೃದ್ಧ ಅರಣ್ಯ ಪ್ರದೇಶದಲ್ಲಿ ಭೂಮಿ ಮಂಜೂರು ಮಾಡಿದ್ದನ್ನು ಮೇನಕಾ ಗಾಂಧಿ ರದ್ದುಗೊಳಿಸಿದ್ದರು. "ಸಮುದ್ರೋತ್ಪನ್ನಗಳ ರಫ್ತು ಹೆಚ್ಚಿಸಲು" ಎಂಬುದಾಗಿ ಹೆಣೆದಿದ್ದ ಯೋಜನೆ ಪರಿಸರ ಖಾತೆಯ ಆಕ್ಷೇಪದಿಂದ ಬಿದ್ದುಹೋಗುವಂತೆ

(3ನೇ ಪುಟಕ್ಕೆ)

---

**ಪದ್ಯದಂಕಣ**

### ಶ್ವಪಚ ದ್ರೌಪದಿ

ಅಕ್ಷಯಪಾತ್ರೆಯಾದರೇನು?
ಉಳಿಸಿದರೆ ತಂಗಳು
ಬಾರದೇ ಹೋದೀತೆ ದುರ್ವಾಸನೆ?
ಪಾಂಚಾಲಿಗೀ ಪಾಠ ಹೇಳಿಕೊಡಲೆಂದು
ಬರಬೇಕಾಯಿತಲ್ಲ ದೂರ್ವಾಸನೇ !

### ಬೀರ ಬಂದ ನೀರೆ

ಬೀರಲು ಬಂದಿದ್ದಾಳೆ
ಮೂರು ಜಡೆಯ ಸುಂದರಿ-
ಕಿರುಗಬ್ಬು, ಎಳ್ಳು, ಬೆಲ್ಲ.
ಬೀರಿ ಹೋಗಬಾರದೇ
ವಾರೆ ನೋಟವೊಂದನು ?
ಕಿರುನಗೆಯೂ ಬೀರಳಲ್ಲಾ!

—ಸಿ. ಪಿ. ರವಿ ಕುಮಾರ್,
(ಸೌಜನ್ಯ: 'ಗಾಂಧಿ ಬಜಾರ್')

---

## ಕ್ರಮಗಳು, ಯೋಜನೆ — ಯೋಚನೆಗಳು

ಪರಿಸರ ಖಾತೆಯ ಸ್ಟೇಟ್ ಸಚಿವೆಯಾಗಿ ಅಧಿಕಾರ ವಹಿಸಿಕೊಂಡ ಕೇವಲ 6 ತಿಂಗಳೊಳಗೆ ಮೇನಕಾ ಆ ಖಾತೆಯ ಅಧಿಕಾರಶಾಹಿಗಳ ತೂಕಡಿಕೆಯನ್ನು ಝಾಡಿಸಿ, ಹಲವಾರು ಕ್ರಮಗಳನ್ನು ಕೈಗೊಂಡಿದ್ದಾರೆ. ಹಾಗೆಯೇ, ಹಲವು ಯೋಜನೆಗಳನ್ನೂ ರೂಪಿಸಿ ಅವುಗಳನ್ನು ಕಾಯ್ದೆಯಾಗಿ ಮಾಡಲು ಅಥವಾ ಜಾರಿಗೊಳಿಸಲು ಯತ್ನಿಸಿದ್ದಾರೆ. ಪರಿಸರ ಖಾತೆ ಅರ್ಥಪೂರ್ಣವಾಗಿ ಕೆಲಸ ನಿರ್ವಹಿಸಬೇಕಾದರೆ ಇನ್ನೂ ಏನೇನಾಗಬೇಕೆಂಬ ಬಗೆಗೂ ಹಲವು ಯೋಚನೆಗಳನ್ನಿಟ್ಟುಕೊಂಡಿದ್ದಾರೆ.

* ಎಲ್ಲಾ ಕೈಗಾರಿಕೋತ್ಪನ್ನಗಳ ಮೇಲೆ ಗುಣಮಟ್ಟ ಖಾತರಿಯ 'ISI' ಗುರುತು ಇರುವಂತೆ 'ಪರಿಸರಕ್ಕೆ ಬಾಧಕವಲ್ಲ' ಎಂಬ ಗುರುತೂ ಇರಬೇಕೆಂಬ ನಿಯಮ.
* ಭಾರತದ ಪೆಟ್ರೋಲ್‌ನಲ್ಲಿರುವ ಗರಿಷ್ಠ ಪ್ರಮಾಣದ ಸೀಸದ ಅಂಶವನ್ನು ಇಳಿಸಿಗೊಳಿಸಲು (ಅಂದರೆ ವಾಯು ಮಾಲಿನ್ಯ ಹದ್ದುಬಸ್ತಿನಲ್ಲಿಡಲು) ವಿದೇಶದಿಂದ ಧನ ಸಹಾಯ ಪಡೆದಾದರೂ ಪರಿಹಾರೋಪಾಯ ಕೈಗೊಳ್ಳಬೇಕೆಂಬ ಯೋಜನೆ;
* ಬೆಳೆಗಳಿಗೆ ಬಳಸುವ ಡಿಡಿಟಿ, ಬಿಎಚ್‌ಸಿ, ಆಲ್ಡ್ರಿನ್, ಮೆಲಾಥಿಯಾನ್ ಮುಂತಾದ ಎಂಟು ವಿಷಕಾರಿ ರಸಗೊಬ್ಬರಗಳನ್ನು ರದ್ದುಪಡಿಸುವ ಮೂಲಕ ಆಹಾರ, ಹಣ್ಣು-ಹಂಪಲು, ನೀರು ಮುಂತಾದುವುಗಳನ್ನು ಕಲಬೆರಕೆ ಮತ್ತು ಮಾಲಿನ್ಯದಿಂದ ರಕ್ಷಿಸಲು ರೂಪಿಸಿದ ನೀತಿ;
* ಶೇ. 100ರಷ್ಟು ತೆರಿಗೆ ವಿನಾಯ್ತಿ ನೀಡಿ ಸಂಗ್ರಹಿಸುವ 'ರಾಷ್ಟ್ರೀಯ ಅರಣ್ಯ ನಿಧಿ' ಮೂಲಕ ಆದಿವಾಸಿ ಜನರಿಗೆ ಹಾಗೂ ಇತರ ಗ್ರಾಮೀಣ ಪ್ರದೇಶದ ಜನತೆಗೆ ಧನ ಸಹಾಯ ಒದಗಿಸಿ, ಅವರು ತಮ್ಮ ಬದುಕು ಸಾಗಿಸಲು ಅರಣ್ಯ ನಾಶ ಎಸಗಬೇಕಾಗಿರುವುದನ್ನು ತಪ್ಪಿಸುವ ಮೂಲಕ ಭಾರತದ ಹಸಿರು ಹೆಚ್ಚಿಸುವ ಯೋಜನೆ;
* ಥರ್ಮಲ್ ವಿದ್ಯುತ್ ಘಟಕಗಳಿಂದ ಸಂಗ್ರಹವಾಗುವ ದಶಲಕ್ಷ ಟನ್ ಕಸದಿಂದ ಇಟ್ಟಿಗೆ ತಯಾರಿಕೆ; ನಗರಗಳ ಕಸದಿಂದ ಇಂಧನ ಮತ್ತು ಗೊಬ್ಬರ ಸೃಷ್ಟಿ ಸಾಧ್ಯವಾಗಲು 'ರಾಷ್ಟ್ರೀಯ ಕಸ-ಕೊಳೆ ನಿಯಂತ್ರಣಾ ಮಂಡಳಿ' ರಚನೆ;
* ಬೃಹತ್ ಅಣೆಕಟ್ಟುಗಳಿಗೆ ವೆಚ್ಚ ಮಾಡುವ ಕೋಟ್ಯಂತರ ರೂ. ಗಳನ್ನು ಸೌರ ಶಕ್ತಿಯಿಂದಲೇ ವಿದ್ಯುತ್ ಪಡೆಯಲು ಬಳಸುವಂತೆ 'ಸೌರ ಶಕ್ತಿ ಆಯೋಗ' ಸ್ಥಾಪನೆಯ ಯೋಜನೆ.
* ಸಾರ್ವಜನಿಕ ಸ್ಥಳಗಳಲ್ಲಿ ಧೂಮಪಾನ ನಿಷೇಧ. ತಂಬಾಕು ಬದಲು ಇತರ ಆಹಾರ ಪದಾರ್ಥ ಬೆಳೆಯುವಂತೆ ರೈತರನ್ನು ಪ್ರೇರೇಪಿಸುವ ನೀತಿ. ಆ ಮೂಲಕ ಕ್ಯಾನ್ಸರ್ ಮಹಾ ಮಾರಿಯನ್ನು ನಾಶ ಮಾಡುವ ನಿರ್ಧಾರ.
* ಅರಣ್ಯ ನಾಶ ತಡೆಗಟ್ಟಲು ಕಟ್ಟಿಗೆಗೆ ಪರ್ಯಾಯವನ್ನು ಸೃಷ್ಟಿಸುವುದು, ಯಾವುದೇ ವಸ್ತುಗಳನ್ನು ಪ್ಯಾಕ್ ಮಾಡಲು ಸೆಣಬು ಬಳಕೆ ; ರೈಲು ಹಳಿಗಳ ಕೆಳಗೆ ಕಟ್ಟಿಗೆ ಕಂಬಗಳ ಬದಲು ಸಿಮೆಂಟ್ ಕಂಬಗಳ ಉಪಯೋಗ ; ಕಾಗದ ತಯಾರಿಕೆಗೆ

(3ನೇ ಪುಟಕ್ಕೆ)

---

## ಪ್ರತಿಭಟನೆ : ಪೋಸ್ಟ್ ಕಾರ್ಡ್ ಚಳುವಳಿ

ಮೇನಕಾ ಗಾಂಧಿಯವರು ಜಾರಿಗೆ ತಂದಿದ್ದ ಹಾಗೂ ರೂಪಿಸಿದ್ದ ಪರಿಸರ ಸಂರಕ್ಷಣಾ ಕ್ರಮಗಳನ್ನೂ ಆಕೆಯ ಅಧಿಕಾರಗಳನ್ನೂ ಮೊಟಕುಗೊಳಿಸಿರುವುದನ್ನು ಪ್ರತಿಭಟಿಸಿ, ಪರಿಸರ ಮತ್ತು ಅರಣ್ಯ ಖಾತೆಯ ನೀತಿ ನಿರೂಪಣೆಯ ವಿಚಾರಗಳಲ್ಲಿ ಆಕೆಗೂ ಪರಿಣಾಮಕಾರಿಯಾಗಿ ಪಾತ್ರ ನಿರ್ವಹಿಸಲು ಅವಕಾಶ ಕಲ್ಪಿಸಬೇಕೆಂದು ಪ್ರಧಾನ ಮಂತ್ರಿ ವಿ. ಪಿ. ಸಿಂಗ್‌ರನ್ನು ಒತ್ತಾಯಿಸಲು ಕೊಪ್ಪ ತಾ॥ಪರಿಸರ ಜಾಗೃತಿ ವೇದಿಕೆ 'ಪೋಸ್ಟ್ ಕಾರ್ಡ್ ಚಳುವಳಿ' ನಡೆಸಲು ಉದ್ದೇಶಿಸಿದೆ.

ಪರಿಸರದ ಬಗ್ಗೆ ಕಳಕಳಿ ಇರುವ ಯಾರು ಬೇಕಾದರೂ ಇದರಲ್ಲಿ ಭಾಗವಹಿಸಬಹುದು. ತಾವು ಮಾತ್ರವಲ್ಲದೆ ತಮ್ಮ ಮನೆಯ ಸದಸ್ಯರು, ತಮ್ಮ ಬಂಧು-ಮಿತ್ರರಿಂದಲೂ ಪೋಸ್ಟ್ ಕಾರ್ಡ್‌ಗಳಿಗೆ ಸಹಿ ಹಾಕಿಸಿ ಕಳಿಸಬಹುದು. ಹಾಗೂ ಇತರರೂ ಹೀಗೆ ಮಾಡುವಂತೆ ಪ್ರೇರೇಪಿಸಬಹುದು. (ಕಾರ್ಡಿಗೆ ಕೇವಲ 15 ಪೈ ಮಾತ್ರ ಆದ್ದರಿಂದ) ಪ್ರತಿಯೊಬ್ಬರೂ ತಮ್ಮಿಂದಾಗುವಷ್ಟೂ ಕಾರ್ಡ್‌ಗಳನ್ನು ಕಳಿಸಬೇಕು. ಕಾರ್ಡ್‌ನಲ್ಲಿ ಈ ಕೆಳಗಿನಂತೆ ಒಕ್ಕಣೆ ಇರಲಿ :

WE URGE UPON YOU TO EXTEND SMT. MANEKA GANDHI, THE MINISTER OF STATE FOR ENVIRONMENT, FULL OPPORTUNITY AND SUPPORT TO IMPLEMENT HER WELL THOUGHT-OF POLICIES AND PROJECTS.

ಕಾರ್ಡ್ ಕಳಿಸಬೇಕಾದ ವಿಳಾಸ :
Sri V. P. Singh
Prime Minister of India,
No. 7, RACE COURSE ROAD,
New Delhi.

ಸಹಿ-
ಹೆಸರು-
ಗ್ರಾಮ-

FORUM FOR ENVIRONMENTAL AWARENESS, KOPPA TALUK,
Chikmagalur Dist., Karnataka.

# ಪ್ರಾಮಾಣಿಕ ಪರಿಸರ ಕಾಳಜಿಯುಳ್ಳ ಮಂತ್ರಿ ಮೇನಕಾ ಗಾಂಧಿ

(2ನೇ ಪುಟದಿಂದ)

ಮಾಡಿದ್ದರು. ಜಲ ಮತ್ತು ಪರಿಸರ ಮಾಲಿನ್ಯ ನಿಯಂತ್ರಣ ಕಾಯ್ದೆ ಜಾರಿಗೊಳಿಸಿದ, ಹಸಿರು ಪಟ್ಟಿ ಪ್ರದೇಶಗಳ ರಕ್ಷಣೆ ಮಾಡದ–ಇನ್ನಿತರ ರೀತಿಯ ಅಕ್ರಮಗಳ ಬಗ್ಗೆ ಕ್ರಮ ಕೈಗೊಳ್ಳದ ಮುಖ್ಯ ಮಂತ್ರಿಗಳಿಗೆ ಶರಾಟೆಯ ಪತ್ರ ಬರೆದು ಕ್ರಮ ಜಾರಿ ಮಾಡಿಸುತ್ತಿದ್ದರು.

ಆದರೆ, ಹೀಗೆ 40 ವರ್ಷಗಳಲ್ಲಿ ಕೇಂದ್ರ ಸರ್ಕಾರ ಸಾಧಿಸದಿದ್ದುದನ್ನು 6 ತಿಂಗಳಲ್ಲಿ ಸಾಧಿಸಿ ತೋರಿಸಿದ ಮೇನಕಾಗೆ ಈಗ ಹೆಚ್ಚು–ಕಮ್ಮಿ ದಿಗ್ಬಂಧನ ವಿಧಿಸಲಾಗಿದೆ. ಈ ಖಾತೆಯ ಪ್ರಧಾನ ಹೊಣೆಯನ್ನು ತನ್ನ ಬಳಿಯೇ ಇಟ್ಟುಕೊಂಡಿದ್ದ ಪ್ರಧಾನಿ ವಿ. ಪಿ. ಸಿಂಗ್ ಕಳೆದ ತಿಂಗಳು ಸಂಪುಟವನ್ನು ಪುನರ್ರಚಿಸಿದಾಗ ನೀಲಮಣಿ ರೌತ್ರಾಯ್ ಎಂಬ ಮುದಿ ರಾಜಕಾರಣಿಗೆ ಈ ಖಾತೆ ವಹಿಸಿ, ಅವರ ನೆರಳಲ್ಲಿ ಮೇನಕಾ ಕಾರ್ಯ ನಿರ್ವಹಿಸುವಂತೆ ಮಾಡಿದ್ದಾರೆ.

ಈ ಮಂತ್ರಿ ಮೇ 30 ರಂದು ಒಂದು ಆದೇಶ ಮಾಡಿ, ಮೇನಕಾ ಗಾಂಧಿಯ ಬಹುತೇಕ ಎಲ್ಲ ಅಧಿಕಾರಗಳನ್ನೂ ಕಸಿದುಕೊಂಡಿದ್ದಾರೆ. ಈಗಷ್ಟೇ ರೂಪುಗೊಳ್ಳುತ್ತಿರುವ ಹೊಸ ಅರಣ್ಯ ನೀತಿ, ರಾಷ್ಟ್ರೀಯ ಬಂಜರು ಭೂಮಿ ಅಭಿವೃದ್ಧಿ ಮಂಡಳಿ, ಎಲ್ಲ ಯೋಜನೆಗಳ ಪರಿಸರಾತ್ಮಕ ವಿಶ್ಲೇಷಣೆ ಮತ್ತು ಅನುಮೋದನೆ, ಅರಣ್ಯೀಕರಣಕ್ಕಾಗಿ ನೂತನವಾಗಿ ರಚಿತವಾದ ರಾಷ್ಟ್ರೀಯ ನಿಧಿ–ಇವೇ ಮುಂತಾದ ಎಲ್ಲ ಜವಾಬ್ದಾರಿಗಳನ್ನೂ ವಹಿಸಿಕೊಂಡು, ಅಭಿವೃದ್ಧಿಯ ಹಲವು ಸೂಕ್ಷ್ಮ ವಿಚಾರಗಳನ್ನು ನಿರ್ವಹಿಸುವ ಈ ಖಾತೆಯ ಮೇಲೆ ತಮ್ಮ ಸಾರ್ವಭೌಮತ್ವ ಸ್ಥಾಪಿಸಿದ್ದಾರೆ.

ಜೆ.ಬಿ. ಪಟ್ನಾಯಕರು ಒಬೆರಾಯ್‌ಗಳಿಗೆ ಕೊಡಮಾಡಿದ್ದ ಅರಣ್ಯ ಭೂಮಿಯನ್ನು ಬಿಡುಗಡೆ ಮಾಡಲು ಒಪ್ಪಿಗೆ ನೀಡಿರುವುದು ಈ ಮಹಾನುಭಾವ ನೆರವೇರಿಸಿರುವ ಘನ ಕಾರ್ಯಗಳಲ್ಲೊಂದು ! ಅಸ್ತಿತ್ವದಲ್ಲೇ ಇಲ್ಲದ 'ರಾಷ್ಟ್ರೀಯ ಮೃಗಾಲಯ ಪ್ರಾಧಿಕಾರ', 'ವನ್ಯಜೀವಿ ಸಂರಕ್ಷಣೆಯ ಬಗೆಗಿನ ಕೇಂದ್ರೀಯ ಯೋಜನೆಗಳು' ಮುಂತಾದುವುಗಳನ್ನೂ, 'ದೆಹಲಿಯ ಮಾಲಿನ್ಯ ನಿವಾರಣೆ', 'ಹರ್ಯಾಣವನ್ನು ಹಸಿರುಗೊಳಿಸುವುದು' ಮುಂತಾದ ಇತರ ಕೆಲಸವನ್ನೂ ಮೇನಕಾರವರ 'ಹೊಣೆಗಾರಿಕೆ'ಗಳೆಂದು ಈ ಆದೇಶ ಹೇಳುತ್ತದೆ.

ಆದರೆ ಒಬೆರಾಯ್‌ಗಳಿಗೆ ಪರವಾನಗಿ ನಿರಾಕರಿಸಿದ್ದ ಮೇನಕಾರ ಆಜ್ಞೆಯನ್ನು ತಾನು ರದ್ದು ಮಾಡಿಲ್ಲವೆಂದೂ, ಮೇನಕಾರ ಅಧಿಕಾರಗಳನ್ನು ಮೊಟಕುಗೊಳಿಸಿಲ್ಲವೆಂದೂ, ಪ್ರಧಾನಿಯ ಕೈಕೆಳಗೆ ಈ ಇಲಾಖೆ ಇದ್ದಾಗ ರೂಪಿಸಿದ್ದ ನೀತಿಗಳಿಗೇ ತಾನು ಸಹ ಈಗಲೂ ಬದ್ಧನಾಗಿರುವುದಾಗಿಯೂ, ಮೇನಕಾ ಜೊತೆ ಮೂಲಭೂತ ನೀತಿಯ ವಿಷಯದಲ್ಲಿ ತನಗೆ ಭಿನ್ನಾಭಿಪ್ರಾಯ ಇಲ್ಲವೆಂದೂ ರೌತ್ರಾಯ್ ಹೇಳಿಕೊಳ್ಳುತ್ತಾರೆ. ಆದರೆ ಮೇನಕಾಗೆ ವಹಿಸಿರುವ (ಉಳಿಸಿರುವ) 'ಜವಾಬ್ದಾರಿ'ಗಳು ಇದಕ್ಕಿಂತ ಬೇರೆಯದನ್ನೇ ಹೇಳುತ್ತವೆ !

ತೆಹರಿ, ನರ್ಮದಾ, ಸರ್ದಾರ್ ಸರೋವರ ಯೋಜನೆಗಳು, ಒರಿಸ್ಸಾದ ಬಲಿಯಾಪಾಲ್‌ನಲ್ಲಿ ಉದ್ದೇಶಿಸಿರುವ ಕ್ಷಿಪಣಿ ನೆಲೆ ಯೋಜನೆ, ಕರ್ನಾಟಕದ ಕೈಗಾ ಯೋಜನೆಗಳಂಥವುಗಳ ವಿರುದ್ಧ ಪರಿಸರ ಸಂಘಟನೆಗಳು ನಡೆಸಿದ್ದ ಹೋರಾಟಗಳಿಗೆ ದೊಡ್ಡ ಪೆಟ್ಟು ಬಿದ್ದಂತಾಗಿದೆ ಅಷ್ಟೇ ಅಲ್ಲ, ಮೇನಕಾ ಗಾಂಧಿಯವರ ಈ ಕಟ್ಟುನಿಟ್ಟಿನಿಂದಾಗಿ ಸದರಿ ಯೋಜನೆಗಳಲ್ಲಿ ನಿರ್ವಸಿತರ ಪುನರ್ವಸತಿ, ಜಲಾನಯನ ಪ್ರದೇಶ ಅಭಿವೃದ್ಧಿ ಹಾಗೂ ಅರಣ್ಯೀಕರಣಗಳ ಬಗ್ಗೆ ಉಂಟಾಗಿದ್ದ ಒತ್ತಡವನ್ನೂ ಈ ಪುಢಾರಿ ಮಂತ್ರಿ ಸಡಿಲಗೊಳಿಸುವ ಲಕ್ಷಣಗಳಿವೆ.

ದೇಶಾದ್ಯಂತದ ಪರಿಸರಾಸಕ್ತರು, ಸಂಘಟನೆಗಳು ವಿರೋಧಿಸಲೇಬೇಕಾದ ವಿಚಾರ ಇದೆಂಬುದರಲ್ಲಿ ಸಂಶಯವಿಲ್ಲ. ●

## ಸಹ್ಯಾದ್ರಿ ಪಾಲಿಟೆಕ್ನಿಕ್ ಅರ್ಜಿ ಸಲ್ಲಿಕೆಗೆ ಅವಧಿ ವಿಸ್ತರಣೆ

ತೀರ್ಥಹಳ್ಳಿ : ಇಲ್ಲಿನ ಸಹ್ಯಾದ್ರಿ ಪಾಲಿಟೆಕ್ನಿಕ್‌ನಲ್ಲಿ 1990–91 ನೇ ಸಾಲಿನ ಡಿಪ್ಲೋಮಾ ಮೊದಲನೇ ವರ್ಷದ ಸಿವಿಲ್, ಎಲೆಕ್ಟ್ರಿಕಲ್ ಮತ್ತು ಮೆಕ್ಯಾನಿಕಲ್ ಕೋರ್ಸುಗಳಿಗೆ ಅರ್ಜಿ ಸಲ್ಲಿಸಲು ದಿನಾಂಕ 25–6–90 ರ ವರೆಗೆ ಅವಕಾಶವಿರುತ್ತದೆ. ಇಚ್ಛೆಯುಳ್ಳವರು ಅರ್ಜಿ ಫಾರಂಗಳನ್ನು 25 ರೂ ಶುಲ್ಕ ನೀಡಿ ಸಹ್ಯಾದ್ರಿ ಪಾಲಿಟೆಕ್ನಿಕ್, ಕುವೆಂಪು ರಸ್ತೆ, ತೀರ್ಥಹಳ್ಳಿ ಇಲ್ಲಿಂದ ಪಡೆಯಬಹುದೆಂದು ಪ್ರಿನ್ಸಿಪಾಲ್ ತಿಳಿಸಿದ್ದಾರೆ.

# ಎಲ್ಲರೂ ಅನಾಗರಿಕರಿಗೆ ಹುಟ್ಟಿದವರೇ....

ಪ್ರಿಯರೆ,

— ಕೊಪ್ಪದ ಸ॥ ಆಸ್ಪತ್ರೆಯ ಕುಂದು–ಕೊರತೆಗಳ ಬಗ್ಗೆ ಶ್ರೀ ವಸಂತ ಕುಮಾರ್ ಹರ್ಡೀಕರ್ ಮತ್ತು ಇತರರು ಬರೆದುದಕ್ಕೆ ಪ್ರತಿಕ್ರಿಯೆಯಾಗಿ ವೈದ್ಯಾಧಿಕಾರಿಗಳಾದ ಡಾ॥ಪ್ರಸಾದ್‌ರವರು ತಮ್ಮ ಅಸಹಾಯಕತೆಯನ್ನು ಒಪ್ಪಿಕೊಂಡಿದ್ದಾರೆ.

ಆದರೆ ಯಾವುದೇ ಒಂದು ಸಂಸ್ಥೆ ಸರಿಯಾಗಿ ನಡೆಯಬೇಕಿದ್ದಲ್ಲಿ ಅದರ ಮೇಲಧಿಕಾರಿಯೇ ಸಂಪೂರ್ಣ ಹೊಣೆಗಾರನಾಗಿರುತ್ತಾನೆ ಉದಾಹರಣೆಗೆ ಕೊಪ್ಪದ ತಾಲ್ಲೂಕು ಕಛೇರಿಯನ್ನೇ ಹೆಸರಿಸಬಹುದು. ಈ

### ಓದುಗರ ಪತ್ರ

ಹಿಂದಿನ ತಹಸೀಲ್ದಾರ್‌ರ ಕಾಲದಲ್ಲಿ ಯಾವ ರೀತಿ ಇತ್ತು? ಈಗಿನ ನಿಷ್ಠಾವಂತ ತಹಸೀಲ್ದಾರರ ಕಾಲದಲ್ಲಿ ಸಾರ್ವಜನಿಕರಿಗೆ ಸಾಧ್ಯವಾದಷ್ಟೂ ಕೆಲಸಗಳನ್ನು ವ್ಯವಸ್ಥಿತ ರೂಪದಲ್ಲಿ ಮಾಡಿಕೊಡಲು ಸಾಧ್ಯವೆಂದು ತಿಳಿಯುತ್ತದೆ.

ಸಾಮಾನ್ಯ ಸಾರ್ವಜನಿಕರೇ ತಿಳಿದುಕೊಂಡು, ನಮ್ಮ ದೇಶದಲ್ಲಿ ಯಾವುದೇ ಆಸ್ಪತ್ರೆಯನ್ನು (ಅಥವಾ ಯಾವುದೇ ಸಂಸ್ಥೆ ಅಥವಾ ಕಛೇರಿಯನ್ನು) ಸಮರ್ಪಕವಾಗಿಡಲು ಸಾಧ್ಯವಿಲ್ಲ. ಅಲ್ಲಿಯ ಮುಖ್ಯಸ್ಥರೇ ಅದನ್ನು ತಿಳಿದುಕೊಂಡು, ಇರುವ ನೌಕರರಲ್ಲೇ ಒಬ್ಬರನ್ನು ಮೇಲ್ವಿಚಾರಕರಾಗಿ ನೇಮಿಸಿಕೊಂಡೋ ಅಥವಾ ಇನ್ಯಾವುದೇ ಕ್ರಮಗಳಿಂದ ಇದನ್ನೊಂದು ಮಾದರಿ ಆಸ್ಪತ್ರೆಯನ್ನಾಗಿ ಮಾಡಲು ಸಾಧ್ಯವಿದೆ. ಪ್ರಾರಂಭದಲ್ಲಿ ಸ್ವಲ್ಪ ದಿನ ತೊಂದರೆಯಾಗಬಹುದು, ಜನರೂ ಸ್ವಲ್ಪ ಪ್ರತಿಭಟಿಸಬಹುದು. ನಂತರ ಸಾರ್ವಜನಿಕರೇ ತಿಳಿದುಕೊಂಡು ಶಿಸ್ತಿನಿಂದ ಸಹಕರಿಸುತ್ತಾರೆ.

ಆದರೆ ಡಾ॥ ಪ್ರಸಾದ್ ತಿಳಿಸಿರುವಂತೆ ಸಾರ್ವಜನಿಕರೆಲ್ಲರೂ ಅನಾಗರಿಕರಲ್ಲ. ಎಲ್ಲೋ ಕೆಲವರು ಇರಬಹುದಷ್ಟೇ. ಹಾಗೆಯೇ ಈಗಿನ ಎಲ್ಲಾ ನಾಗರಿಕರು ಈ ಹಿಂದಿನ ಅನಾಗರಿಕ ಮಾನವ ಜನಾಂಗಕ್ಕೆ ಹುಟ್ಟಿದವರೇ ತಾನೆ?

ಸ್ಥಳೀಯ ಶಾಸಕರು, ಪುರಸಭಾ ಅಧ್ಯಕ್ಷರು ಮತ್ತು ಅಧಿಕಾರಿಗಳು ಹಾಗೂ ಸಂದರ್ಶಕ ಸಮಿತಿಯವರು ಈ ಆಸ್ಪತ್ರೆಯ ವಿಷಯದಲ್ಲಿ ಉದಾಸೀನರಾಗಿರುವುದು ತುಂಬಾ ಆಶ್ಚರ್ಯಕರವಾಗಿದೆ. ಇನ್ನು ಮುಂದಾದರೂ ಈಗಿರುವ ಸೌಲಭ್ಯಗಳನ್ನೇ ವ್ಯವಸ್ಥಿತವಾಗಿ ಬಳಸಿಕೊಳ್ಳುವುದಲ್ಲದೆ, ಇನ್ನೂ ಹೆಚ್ಚಿನ ಸೌಲಭ್ಯಗಳನ್ನು ಪಡೆಯಲು ಎಲ್ಲರೂ ಒಟ್ಟಾಗಿ ಶ್ರಮಿಸಲೇಬೇಕು.

—ಕಳಂತಲಾ ಕೆ. ಶಾಂತಕುಮಾರ್,
ಕುದುರೆಗುಂಡಿ.

# ಕ್ರಮಗಳು, ಯೋಜನೆ-ಯೋಚನೆಗಳು

(2ನೇ ಪುಟದಿಂದ)

ನೀರಿನಲ್ಲಿ ಬೆಳೆಯುವ ಒಂದು ರೀತಿಯ ಗಡ್ಡೆ ಗಿಡವಾದ ಹಾವುವಿನ(hyacinth) ಬಳಕೆ.

* ಕಾಡು ಪ್ರಾಣಿಗಳ ಜೀವರಕ್ಷಣೆ ಕಾಯ್ದೆಯನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸುವ ಬಗ್ಗೆ ವಿಶೇಷ ಸುತ್ತೋಲೆ ಹಾಗೂ ಈ ಕಾಯ್ದೆಯನ್ವಯ 'ರಾಷ್ಟ್ರೀಯ ಪ್ರಾಣಿ ಸಂಗ್ರಹಾಲಯಗಳ ಪ್ರಾಧಿಕಾರ' ನಿರ್ಮಿಸಿ ಪಶು–ಪಕ್ಷಿಗಳ ಬಗ್ಗೆ ಕರುಣೆಯ ನಡವಳಿಕೆಗೆ ಕ್ರಮ.

* ಯಾವುದೇ ಹೊಸ ಕಾರ್ಖಾನೆ, ಯೋಜನೆ ರೂಪಿಸುವ ಸರ್ಕಾರಿ ಅಥವಾ ಖಾಸಗಿ ಸಂಸ್ಥೆಗಳು ಪರಿಸರ ರಕ್ಷಣಾ ಖಾತೆಯಿಂದ 'ಅಭ್ಯಂತರವಿಲ್ಲ' ಎಂಬ ಪ್ರಮಾಣ ಪತ್ರವನ್ನು (No objection certificate) ಪಡೆಯಲೇಬೇಕೆಂಬ ಕಾಯ್ದೆ.

* ನದಿಗಳ ನೀರು, ವಿತರಣೆ ಮತ್ತು ಕೊಳೆ ಶುದ್ಧಿ ಕುರಿತು ಕ್ರಮ ಕೈಗೊಳ್ಳಲು ರಾಷ್ಟ್ರೀಯ ಯೋಜನೆ.

* ಅನಿವಾರ್ಯವಾಗಿ (ಉದಾ : ರಸ್ತೆ ಮುಂತಾದುವುಗಳಿಗಾಗಿ) ಕಾಡು ಕಡಿಯಲೇಬೇಕಾದಲ್ಲಿ, ಕಡಿಯಬೇಕಾಗುವ ಪ್ರತಿಯೊಂದು ಮರಕ್ಕೆ ಒಂದಕ್ಕೆ ಹತ್ತರಂತೆ ಬೇರೆ ಕಡೆ ಗಿಡ ನೆಡಬೇಕು ; ಅದನ್ನು ಮೊದಲು ಮಾಡಬೇಕು—ಎಂಬ ನಿಯಮ.

* ಸೌರ ಶಕ್ತಿ, ಗಾಳಿಶಕ್ತಿ, ಸಮುದ್ರದ ಅಲೆಗಳ ಶಕ್ತಿ ಮುಂತಾದುವುಗಳಿಂದೆಲ್ಲ ವಿದ್ಯುತ್ ಉತ್ಪಾದಿಸುವುದೂ ಸೇರಿದಂತೆ ಬದಲಿ ಶಕ್ತಿ ಉತ್ಪಾದನೆ ಮತ್ತು ಸಂಶೋಧನೆಯ ಇಲಾಖೆಯನ್ನು ಇಂಧನ ಸಚಿವ ಖಾತೆಯಿಂದ ಪರಿಸರ ಖಾತೆಗೆ ವರ್ಗಾಯಿಸಿ, ಅದಕ್ಕೆ ಪೂರ್ಣ ಉತ್ತೇಜನ ನೀಡಬೇಕೆಂಬ ಯೋಚನೆ

ಇತ್ಯಾದಿ, ಇತ್ಯಾದಿ. ●

## ಅಲೆವ ಮನ ● 'ರಾನು'

# ಹೃದಯದ ಬಡಿತವ ತಿಳಿಯಲಾರದ ಮನಗಳು....

ಆತ್ಮೀಯ,

ಬಹು ದಿನಗಳ ನಂತರ ನಿನ್ನೊಡನೆ ಮಾತನಾಡುತ್ತಿದ್ದೇನೆ ಆದರೆ ಇಂದು ಏನು ಮಾತನಾಡಲಿ? ಆಗಲಿ—ಒಂದು ಕತೆಯನ್ನು ನಿನ್ನೊಡನೆ ಹಂಚಿಕೊಳ್ಳಲೇ ?

ಒಬ್ಬನಿದ್ದ–ಅವನಿಗೆ ಹಲವಾರು ಹುಚ್ಚು–ಕನಸುಗಳಿದ್ದವು. ತನ್ನ ಸುತ್ತಲಿನ ಸಮಾಜ ಸುಂದರವಾಗಿರಬೇಕು. ಕಪಟ, ವಂಚನೆಗಳಿಲ್ಲದ–ನೇರ, ಸರಳ ನಡೆ ನುಡಿಗಳು ಸಾಮಾನ್ಯ ಸಂಗತಿಗಳಾಗಿರಬೇಕು–ಎನ್ನುವುದು ಅವನ ಹಲವು ಕನಸುಗಳಲ್ಲೊಂದು.

ಅವನ ಹೆಂಡತಿಗೂ ಕೆಲವು ಸಣ್ಣ ಆಸೆಗಳು–ಪುಟ್ಟ ಕನಸುಗಳಿದ್ದವು. ತನ್ನ ಗಂಡ ಹಲವಾರು ವರ್ಷ ಹಳ್ಳಿಗಳಲ್ಲಿ,'ಹಣವನ್ನು ಮಾಡದೆ' ವಾಸಿಸಿದ. ಇನ್ನಾದರೂ ಎಂದಾದರೂ ಅನುಮನ್ಯ ವನ್ನಾದರೂ ಪುಟ್ಟ ಮನೆಯಲ್ಲಿ–ಅದೂ ನಗರದಲ್ಲಿ ಇರುವ (!) ಮನೆಯಲ್ಲಿ ವಾಸಿಸಬೇಕು ; ತನ್ನ ಮಕ್ಕಳಿಗೆ ವಿದ್ಯಾಭ್ಯಾಸಕ್ಕೆ ಸ್ವಲ್ಪವಾದರೂ ಅನುಕೂಲವಾಗುವಂಥ–ನಗರ ಅಲ್ಲದಿದ್ದರೂ ಪರವಾ ಇಲ್ಲ, ಸಣ್ಣ ಪೇಟೆಯೂ ಸಾಕು —ಎಂದು ಕನಸಿದಳಾಕೆ.

ಊಹೂಂ, ಅವು ಯಾವುವೂ ಸಾಧ್ಯವಾಗಲಿಲ್ಲ ! ಅವರ ಜೀವನಕ್ಕೆ ಬಲವಾದ ಪೆಟ್ಟು ಬಿತ್ತು ಆ ಪೆಟ್ಟು–ಬೆಳ್ಳಗಿದ್ದದ್ದೆಲ್ಲಾ ಹಾಲೆಂದು ನಂಬಬೇಡ, ಹುಚ್ಚಾ–ಎಲ್ಲರನ್ನೂ ಸಂಶಯದಿಂದ ನೋಡು. ಒದೆ, ಇಲ್ಲ ಒದೆಸಿಕೊ–ಇಷ್ಟೇ ಒದೆಯದೇ, ಒದೆಸಿಕೊಳ್ಳದೆಯೇ ಇರುವಂಥ ಬದುಕು ಇಲ್ಲಿ ಅಸಾಧ್ಯ ಎಂದು ಸಿಕ್ಕು ಗುಟ್ಟಿತು.

ಅವರ ಕನಸುಗಳು, ಪುಟ್ಟ ಆಸೆಗಳು ಪುಡಿ ಪುಡಿಯಾದವು. ಅವನ ಹೃದಯ ಕೂಗಿತು–ಅವಳ ಹೃದಯ ಕೂಗಿತು–ಹನಿ ಹನಿಯಾಗಿ ರಕ್ತ ತೊಟ್ಟಿಕ್ಕಿತು. ಹಾಂ, ಹಲವಾರು ಹೃದಯಗಳು ಕೂಗಿ, ಸುರಿದ ರಕ್ತದೊಟ್ಟಿಗೆ ಸೇರಿತು.

ಈ ನಾಡಿನ ಕರಾಳ ಕೋಳಿಯನ್ನು ತೋರಿದೀತೇ ಅದು ? ಹೇಳು–ಹೃದಯದ ಬಡಿತವನ್ನು ತಿಳಿಯಲಾರದ ಮನಗಳನ್ನು ತಟ್ಟೀತೇ ? ಕಣ್ಣಿದ್ದೂ ಕುರುಡಾಗಿ ದೃಷ್ಟಿ ಬರಿಸೀತೇ ? ಹೇಳು ಆತ್ಮೀಯ —

ನಿನ್ನವ,
ರಾನು.

# ಜನತಾ ಮನೆಗಳಿಗೆ ಹೆಂಚು-ನಾಟ ಪೂರೈಸಿಲ್ಲ

ಕೊಪ್ಪ : ಈ ವರ್ಷ ಜನತಾ ಮನೆ ಮಂಜೂರಾಗಿದ್ದ ಬಡ ಜನರಿಗೆ ಇನ್ನೂ ಹೆಂಚು-ನಾಟ ಬರದೆ ಬಹಳ ತೊಂದರೆಯಾಗಿದೆಯೆಂದು ಹರಂದೂರು ಮಂಡಲ ಸದಸ್ಯ ಡಿ. ನಾಗರಾಜ್ ತಿಳಿಸಿದ್ದಾರೆ

ಕಳೆದ ವರ್ಷದ ಫಲಾನುಭವಿಗಳಲ್ಲೇ ಹಲವರಿಗೆ ಹೆಂಚು-ನಾಟ ಸಿಕ್ಕಿರಲಿಲ್ಲ ಈ ಬಾರಿಯ ಟೆಂಡರ್‌ದಾರರು, ಈಚೆಗೆ ಹೆಂಚುಗಳ ಬೆಲೆ ಏಕಾಏಕಿ ಏರಿರುವುದರಿಂದ ಟೆಂಡರ್ ಬೆಲೆಯಲ್ಲಿ ಪೂರೈಸಲು ಆಗುವುದಿಲ್ಲವೆಂದು ತಿಳಿಸಿದ್ದಾರೆಂದು ಹೇಳಲಾಗುತ್ತಿದೆ ಎಂದಿರುವ ಅವರು, ತಾ. ಪಂ. ಸಮಿತಿ ಮತ್ತು ಜಿಲ್ಲಾ ಪರಿಷತ್ತುಗಳು ಕೂಡಲೇ ಈ ಬಗ್ಗೆ ತುರ್ತುಕ್ರಮ ಕೈಗೊಂಡು ಮಳೆಗಾಲ ತೀವ್ರವಾಗುವ ಮೊದಲೇ ಫಲಾನುಭವಿಗಳಿಗೆ ಅನುಕೂಲ ಮಾಡಿಕೊಡಬೇಕೆಂದು ಒತ್ತಾಯಿಸಿದ್ದಾರೆ.

**ಹೆಚ್ಚುವರಿ ಭೂಮಿ ಅಭಿವೃದ್ಧಿಗೆ ನೆರವು ಯೋಜನೆ ಸ್ಥಗಿತ?**

ಸಣ್ಣ ರೈತರಿಗೆ ಹೆಚ್ಚುವರಿ ಭೂಮಿ ಅಭಿವೃದ್ಧಿಗಾಗಿ ಸಹಾಯ ಧನ-ನೆರವು ನೀಡುವುದಾಗಿ ಜಿ. ಪ. ನಿರ್ದೇಶನದಂತೆ ತಾ. ಪಂ. ಸಮಿತಿ ವತಿಯಿಂದ ಹಲವಾರು ಕಡತಗಳನ್ನು ತಯಾರಿಸಲಾಗಿತ್ತು. ಹರಂದೂರು ಮಂಡಲದಲ್ಲೇ 10–15 ಜನರಿಗೆ ಶಿಫಾರ್ಸು ಮಾಡಲಾಗಿತ್ತು. ಆದರೆ ಜಿಲ್ಲಾ ಪರಿಷತ್ತು ಯಾರಿಗೂ ಮಂಜೂರಾತಿ ನೀಡಿಲ್ಲವೆನ್ನಲಾಗಿದೆ. ಜಿ. ಪ. ಅಧ್ಯಕ್ಷರು ಕೂಡಲೇ ಈ ಬಗ್ಗೆ ಗಮನ ನೀಡಬೇಕೆಂದೂ ನಾಗರಾಜ್ ಒತ್ತಾಯಿಸಿದ್ದಾರೆ.

## ಕೃಷಿ ಪತ್ರಿಕೋದ್ಯಮ ಶಿಬಿರ

ಕೃಷಿ ಪತ್ರಿಕೆಗೆ ಲೇಖನಗಳಿಗಾಗಿ ಕೃಷಿಯ ಅನುಭವ-ಹಿನ್ನೆಲೆ ಇಲ್ಲದ ಪತ್ರಕರ್ತರನ್ನು ಅವಲಂಬಿಸುವುದಕ್ಕೆ ಬದಲು, ಆಸಕ್ತ ಕೃಷಿಕ ತರುಣರಿಗೆ ಪತ್ರಿಕೋದ್ಯಮದ ಬಗ್ಗೆ ತರಬೇತಿ ನೀಡಿ, ಕೃಷಿಕರೇ ಲೇಖನಿ ಎತ್ತುವಂತೆ ಪುಸಲಾಯಿಸುವುದು ಉತ್ತಮ ಎಂಬುದು 'ಅಡಿಕೆ ಪತ್ರಿಕೆ'ಯ ನಂಬಿಕೆ ಈ ನಿಟ್ಟಿನಲ್ಲಿ 1989ರಲ್ಲಿ, ನೀರ್ಚಾಲಿನಲ್ಲಿ ನಡೆಸಲಾದ 'ಕೃಷಿ ಪತ್ರಿಕೋದ್ಯಮ ಶಿಬಿರ' ರವಷ್ಟು ಫಲ ಕೊಡತೊಡಗಿದೆ ಎಲ್ಲವೂ ನಿರೀಕ್ಷೆಯಂತೆ ನಡೆದರೆ, ಅಡಿಕೆ ಪತ್ರಿಕೆಯ ಸಹಭಾಗಿತ್ವದಲ್ಲಿ ಆಗಸ್ಟ್ ತಿಂಗಳ ಸುಮಾರಿಗೆ 4 ದಿನಗಳ ಕೃಷಿ ಪತ್ರಿಕೋದ್ಯಮ ಶಿಬಿರವನ್ನು ಕೊಪ್ಪದಲ್ಲಿ ನಡೆಸುವ ಇರಾದೆಯಿದೆ. ಆಸಕ್ತ ಕೃಷಿಕರು 'ಅಡಿಕೆ ಪತ್ರಿಕೆ'ಯ ಕಚೇರಿಗೆ ಪತ್ರ ಬರೆದರೆ, ಯೋಜನೆ ರೂಪ ಪಡೆದಾಗ ಸಂಪರ್ಕಿಸಲಾಗುತ್ತದೆ.

## ಅಡಿಕೆ ಧಾರಣೆ

ಶಿವಮೊಗ್ಗ : 16-6-1990
ಸರಕು : 4110-4466
ಬೆಟ್ಟೆ : 3169-3859
ಗೊರಬಲು : 2261-2703
ಸಾಗರ 16-6-1990
ಇಡಿ : 3579-3775
ಆಪಿ : 4659-4899
ಚಾಲಿ : 2996-3151
ಸಿಪ್ಪೆ ಗೋಟು : 1489-1625

## ಸ್ನೇಹ ಮಹಿಳಾ ಒಕ್ಕೂಟ

ಕೊಪ್ಪ

ತಾ|| 15-6-90ರಂದು ನಡೆದ ಅದೃ ಬಹುಮಾನ ಯೋಜನೆಯ ಡ್ರಾ ತಾಂಶ : I - 790; II - 133 III - 176.

ಬಹುಮಾನ ಪಡೆದಿರುವವರು 15 ದೊಳಗಾಗಿ ಟಿಕೇಟುಗಳನ್ನು ಮೇಲಿನ ಮಹಿಳಾ ಸೊಸೈಟಿಯಲ್ಲಿ ತೋರಿಸಿ ಮಾನ ಪಡೆಯಬಹುದು.

ಅಧ್ಯಕ್ಷ

# ಮಳೆಯೆಂದು ಮನೆಯಲ್ಲೇ ಕೂತು ನೀಡಿದ ಹೇಳಿಕೆಯೆ?

ಪ್ರಿಯರೆ,

ತಾ|| 9 6.90ರ 'ಪ್ರಜಾವಾಣಿ'ಯಲ್ಲಿ ಪ್ರಕಟವಾದ ವರದಿಯಲ್ಲಿ ಕೊಪ್ಪದ ಸಹಾಯಕ ಕೃಷಿ ನಿರ್ದೇಶಕರು, ಕೊಪ್ಪ ತಾಲ್ಲೂಕಿನಲ್ಲಿ ಶೇ. 80 ಭಾಗ ಭತ್ತದ ಬೆಳೆ ಕಟಾವು ಆಗಿರುವುದಾಗಿಯೂ, ಹೆಚ್ಚಿನಂಶ ರೈತರು ತಮ್ಮ ಘನ ನಿರ್ದೇಶನದಂತೆ 80 ರಿಂದ 95 ದಿವಸಗಳ ಅಲ್ಪ ಅವಧಿಯ ಬೆಳೆಗಳಾದ ಮಂಗಳಾ, ಮಧು, ಐ.ಆರ್. 20 ಬೆಳೆಗಳನ್ನು ಬೆಳೆದಿದ್ದು ಅವೆಲ್ಲ ಸುರಕ್ಷಿತವಾಗಿರುವುದಾಗಿಯೂ ಕಟಾವಿಗೆ ತೊಂದರೆಯಾಗಿಲ್ಲವೆಂದೂ.... ಇತ್ಯಾದಿ ಇತ್ಯಾದಿ ಅಪ್ಪಣೆ ಕೊಡಿಸಿದ್ದಾರೆ.

### ಓದುಗರ ಪತ್ರಗಳು

ಇದು, ಬಹುಶಃ ಮಳೆ ಜಾಸ್ತಿ ಇದ್ದುದರಿಂದ ಮಾನ್ಯ ಸ.ಕೃ ನಿ ಯವರಿಗೆ ಕ್ಷೇತ್ರ ವೀಕ್ಷಣೆ ನಡೆಸಲು ಸಾಧ್ಯವಾಗದೆ, ಮನೆಯಲ್ಲೇ (ಅಥವಾ ಕಛೇರಿಯೊಳಗೇ) ಬೆಚ್ಚಗೆ ಕುಳಿತು ನೀಡಿದ ಹೇಳಿಕೆ ಇರಬೇಕು ! ಏಕೆಂದರೆ, ಒಂದು ವೇಳೆ ಕ್ಷೇತ್ರ ವೀಕ್ಷಣೆಗೆ ಬಿಜಯ ಮಾಡಿಸಲು ಸಾಧ್ಯವಾಗದಿದ್ದರೂ ಅಕಸ್ಮಾತ್ ಆ ಕಡೆ-ಈ ಕಡೆ ಓಡಾಡುವಾಗ ಕಣ್ಣು-ಕಿವಿಗಳನ್ನು ತೆರೆದಿಟ್ಟುಕೊಂಡಿದ್ದರೂ ಇಂಥ ಆಣಿಮುತ್ತುಗಳು ಅವರಿಂದ ಉದುರುತ್ತಿರಲಿಲ್ಲವೆಂದು ಯುವ ಶತ ದಡ್ಡನಾದರೂ ಹೇಳಿಯಾನು !!

ಒಂದು ತಾಲ್ಲೂಕಿನ ಶೇ. 80ರಷ್ಟು ರೈತರು ಒಬ್ಬ ಕೃಷಿ ಅಧಿಕಾರಿಯ ಸಲಹೆಯಂತೆ ನಡೆಯುವಷ್ಟು ತಜ್ಞತೆ, ನಂಬಿಕೆಗೆ ಅರ್ಹತೆಗಳು ಕೃಷಿ ಅಧಿಕಾರಿಗಳಿಗೆ ಬಂದ ದಿನ ಎಂಥ ಸುಭಿಕ್ಷದ್ದು ! ಈ ಕೃಷಿ ಅಧಿಕಾರಿಗಳ ಮಾತಿಗೆ ಇಂಥ ವಿಶ್ವಾಸಾರ್ಹತೆ ಬರುವ ಹಾಗೆ ಕೃಷಿ ವಿಜ್ಞಾನಿಗಳೂ ಸಹ ಬಂಡವಾಳಶಾಹಿ ಕಂಪೆನಿಗಳ ಹಿತಾಸಕ್ತಿಯ ಬದಲು ರೈತರ ಹಿತಾಸಕ್ತಿಯ ನೈಜ ಕಳಕಳಿ ಬೆಳೆಸಿಕೊಂಡ ದಿನ ಎಂಥ ಸುವರ್ಣ ದಿನ ! ಅಂಥ ದಿನವನ್ನು ನಮ್ಮ ಈ ಕೃಷಿ ಅಧಿಕಾರಿಯವರು ಕಡೇ ಪಕ್ಷ ತಮ್ಮ ಪತ್ರಿಕಾ ಹೇಳಿಕೆಯಲ್ಲಾದರೂ ಸೃಷ್ಟಿಸಿದ್ದಾರಲ್ಲ — ಕೈಯಾರೆ ಬೆಳೆಸಿದ ಬೆಳೆಯನ್ನು ಕಣ್ಣೆದುರೇ ಕಳೆದುಕೊಂಡ ಶೇ. 80 ಭಾಗ ರೈತರ ಹೊಟ್ಟೆ ತಣ್ಣಗಾದಂತಾಯ್ತು. ಧನ್ಯ ಧನ್ಯ ನಮ್ಮ ಈ ಸ.ಕೃ ನಿ. !

—ಧರ್ಮೇಗೌಡ,
ಬಸರಿಬೈಲು-ಗುಣವಂತೆ.

# 'ಬೆಂದ ಹೊಟ್ಟೆಗೆ ಬೆಂಕಿ ಇಕ್ಕುವ 'ಕೆಲಸ'

ಪ್ರಿಯರೆ,

ಮಲೆನಾಡಿನಲ್ಲಿ ಪ್ರತಿ ವರ್ಷ ಜೂನ್ ಮೊದಲನೆ ಅಥವಾ 2ನೇ ವಾರದಲ್ಲಿ ಆರಂಭವಾಗುವ ಮಳೆ ಈ ಬಾರಿ ಮೇ ತಿಂಗಳಿನಲ್ಲೇ ಪ್ರಾರಂಭವಾಗಿದ್ದು, ಅಕಾಲಿಕ ಮಳೆಯಿಂದಾಗಿ ಬಹುತೇಕ ರೈತರ ಭತ್ತದ ಬೆಳೆ ಹಾನಿಗೀಡಾಗಿದೆ. ಜಯ, ಮಧು ಭತ್ತದ ಬೆಳೆಯಂತೂ ಶೇ. 90 ಭಾಗ ಮಳೆಗೆ ಸಿಕ್ಕಿದೆ. ಕಸಬಾ, ಹರಿಹರಪುರ ಮತ್ತು ಜೈಪುರ-ಹೀಗೆ ಮೂರೂ ಹೋಬಳಿಗಳಲ್ಲೂ ಹಾನಿಯಾಗಿದ್ದು, ಶೇ. 60 ಭಾಗವಂತೂ ಪೂರ್ತಿ ಹಾಳಾಗಿದೆ.

ಹೀಗಿದ್ದರೂ ಸಹ, ಕೊಪ್ಪದ ಸಹಾಯಕ ಕೃಷಿ ನಿರ್ದೇಶಕ ಶ್ರೀನಿವಾಸಯ್ಯ ಅವರು ಕೇವಲ ಶೇ. 10 ಭಾಗ ಬೆಳೆ ನಷ್ಟವಾಗಿರುವುದಾಗಿ ತಾ. 9-6-90ರ 'ಪ್ರಜಾವಾಣಿ'ಯಲ್ಲಿ ಹೇಳಿಕೆ ನೀಡಿರುವುದು ಬೇಜವಾಬ್ದಾರಿಯ ಮಾತೆಂದು ಪ್ರತಿಯೊಬ್ಬ ರೈತನೂ ಆಡಿಕೊಳ್ಳುವ ಮಾತಾಗಿದೆ.

ಜವಾಬ್ದಾರಿ ಸ್ಥಾನದಲ್ಲಿರುವ ಇಂಥ ಅಧಿಕಾರಿಗಳು ಸಾಧ್ಯವಿದ್ದರೆ ಇಂಥ ದುರ್ಭರ ಪರಿಸ್ಥಿತಿಯಲ್ಲಿ ರೈತರಿಗೆ ತಮ್ಮಿಂದಾದಷ್ಟು ನೆರವು ನೀಡಬೇಕು. ಅದಲ್ಲವಾದರೆ, ಇಂಥ ಬೇಜವಾಬ್ದಾರಿ ಹೇಳಿಕೆಗಳನ್ನು ನೀಡುವ ಮೂಲಕ 'ಬೆಂದ ಹೊಟ್ಟೆಗೆ ಬೆಂಕಿ ಇಕ್ಕುವ ಕೆಲಸ'ವನ್ನಾದರೂ ನಿಲ್ಲಿಸಿ ತೆಪ್ಪಗಿರಬೇಕು

—ನೊಂದ ಸಹಸ್ರಾರು ರೈತರ ಪರವಾಗಿ,
ಎಸ್. ಎನ್. ರಾಮಸ್ವಾಮಿ.
ಕಿಟ್ಟೆಗದ್ದೆ

# ಬಿಳಲುಕೊಪ್ಪ-ಬೆತ್ತದಕೊಳಲು ರಸ್ತೆ ಈ ವರ್ಷವಾದರೂ ಪೂರ್ತಿಯಾದೀತೆ?

ಪ್ರಿಯರೆ,

ಕೊಪ್ಪ ತಾ|| ಅತ್ತಿಕುಡಿಗೆ ಮಂಡಲ ಪಂಚಾಯ್ತಿಗೊಳಪಟ್ಟ ಬೆತ್ತದಕೊಳಲು ಗ್ರಾಮಕ್ಕೆ 'ಹಳ್ಳಿ ಹೆದ್ದಾರಿ' ರಸ್ತೆ ನಿರ್ಮಾಣ ಮಾಡಲು ಜಿಲ್ಲಾ ಪರಿಷತ್‌ನಲ್ಲಿ 1987ನೇ ಇಸ್ವಿಯಲ್ಲಿ ಮಂಜೂರಾತಿ ದೊರೆತಿದ್ದು ರಸ್ತೆ ನಿರ್ಮಾಣದ ಕೆಲಸವನ್ನು ಕಾಡಪ್ಪ ಗೌಡರವರು ವಹಿಸಿಕೊಂಡು ಸದ್ರಿ ವರ್ಷದಲ್ಲಿ ಕೆಲಸ ಪ್ರಾರಂಭಿಸಿ ಮಾರ್ಚಿಯಲ್ಲಿ ಒಂದು ಬಿಲ್ ಹಣ ಪಡೆದಿದ್ದಾರೆ. ನಂತರ ಅದೇ ವರ್ಷ ಜೂನ್ ಆಖೈರ್ ವರೆಗೂ ಕೆಲಸ ನಡೆಯುತ್ತಿದ್ದು ಸ್ವಲ್ಪ ದೂರ ರಸ್ತೆ ಕೆಲಸ ಮಾಡಿಸಿದ್ದಾರೆ.

ನಂತರ ನಿಂತು ಹೋದ ಕೆಲಸ 3 ವರ್ಷ ಕಳೆದರೂ ಇದುವರೆಗೂ ನಡೆದಿಲ್ಲ. ... ಅಡ್ಡಲಾಗಿ 2 ನೀರು ಕಾಲುವೆ, 2 ಹಳ್ಳ ಇದ್ದು, ಇವುಗಳಿಗೆ ಮೋರಿ ಮಾಡಲು ಸಿಮೆಂಟ್ ಪೈಪುಗಳನ್ನು ಬಿಳಲುಕೊಪ್ಪದಲ್ಲಿ ರಸ್ತೆ ಪ್ರಾರಂಭವಾಗಬೇಕಾದ ಸ್ಥಳದಲ್ಲಿ ಇಳಿಸಲಾಗಿತ್ತು. ಈಗ ಸದ್ರಿ ಪೈಪ್‌ಗಳೂ ಅಲ್ಲಿ ಕಾಣಿಸುತ್ತಿಲ್ಲ.

ಈ ವಿಚಾರದಲ್ಲಿ ಗ್ರಾಮಸ್ಥರು ಜಿಲ್ಲಾ ಪರಿಷತ್ ಅಧ್ಯಕ್ಷರಿಗೆ ಅಹವಾಲು ಸಲ್ಲಿಸಿರುವುದಲ್ಲದೆ ಶಾಸಕರು ಮತ್ತು ಪರಿಷತ್ ಸದಸ್ಯರ ಗಮನವನ್ನೂ ಸೆಳೆದಿದ್ದಾರೆ. 3 ವರ್ಷಗಳಿಗೂ ಹಿಂದೆ ಪ್ರಾರಂಭಿಸಿ ನಿಲ್ಲಿಸಿದ ರಸ್ತೆ ಕೆಲಸವನ್ನು ಈ ವರ್ಷದಲ್ಲಿಯಾದರೂ ಮಾಡಿ, ಗ್ರಾಮಸ್ಥರಿಗೆ ಸಂಪರ್ಕವನ್ನು ಕಲ್ಪಿಸಿಕೊಟ್ಟಾರೆ?

—ಬಿ. ರಾಮಚಂದ್ರಯ್ಯ,
ಕನಕನಹಳ್ಳಿ.



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್. ಅಚ್ಚು : ದೀವಟಿಗೆ ಅಚ್ಚುಕೂಟ, ಕೊಪ್ಪ